ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಮೂಗೂರು ತ್ರಿಪುರ ಸುಂದರಿ ಅಮ್ಮನವರ ದೇವಾಲಯದಲ್ಲಿ ಭಕ್ತರಿಗೆ ಸೌಲಭ್ಯವನ್ನು ಕಲ್ಪಿಸುವುದು

ಶ್ರೀ ಎಸ್. ನಾಗರಾಜು (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

260 (204) ಮಾನ್ಯ ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಮೈಸೂರು ಜಿಲ್ಲೆ, ತಿ. ನರಸೀಪುರ ತಾಲ್ಲೂಕು, ಮೂಗೂ ತ್ರಿಪುರ ಸುಂದರಿ ಅಮ್ಮನವರ ದೇವಾಲಯದ ಬಳಿ ಸೂಕ್ತ ಜಾಗದಲ್ಲಿ ಶಾಶ್ವತ ಮುಡಿಕಟ್ಟೆ ನಿರ್ಮಾಣ ಮಾಡಲು ಹಾಗೂ ಭಕ್ತಾದಿಗಳಿಗೆ ಸ್ನಾನದ ಮನೆ ಹಾಗೂ ನೀರಿನ ಸೌಲಭ್ಯ ಕಲ್ಪಿಸಲು ಕ್ರಮ ಜರುಗಿಸಲಾಗುವುದೇ;

(ಆ) ದೇವಾಲಯಕ್ಕೆ ಪ್ರತಿದಿನ ಬರುವ ಭಕ್ತಾದಿಗಳಿಗೆ ಸೂಕ್ತ ಜಾಗದಲ್ಲಿ, ಕೈಕಾಲು ತೊಳೆಯಲು ನೀರಿನ ಸೌಲಭ್ಯ, ಕುಡಿಯುವ ನೀರಿನ ಸೌಲಭ್ಯ ಹಾಗೂ ಪಾವತಿಸಿ ಉಪಯೋಗಿಸುವ ಶೌಚಾಲಯಗಳನ್ನು ಕಲ್ಪಿಸಿಕೊಡಲು ಕ್ರಮ ಜರುಗಿಸಲಾಗುವುದೇ;

(ಇ) ಈಗ ಕೆರೆ ಬಳಿ ನಿರ್ಮಿಸಿರುವ ಶೌಚಾಲಯ ಉಪಯೋಗಕ್ಕೆ ಬರುತ್ತಿಲ್ಲವಾದ ಕಾರಣ ಭಕ್ತಾದಿಗಳಿಗೆ ಅನುಕೂಲವಾಗುವಂತೆ ಸೂಕ್ತ ಸ್ಥಳದಲ್ಲಿ ಇದನ್ನು ನಿರ್ಮಿಸಿ, ಪಾವತಿ ಆಧಾರದ ಮೇಲೆ ಉಪಯೋಗಿಸುವ (ಪೇ ಅಂಡ್ ಯೂಸ್) ಶೌಚಾಲಯ ನಿರ್ಮಿಸಲು ಕ್ರಮ ಜರುಗಿಸಲಾಗುವುದೇ ?